


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 15-03-2021 ಪ್ರಶ್ನೆ ಸಂಖ್ಯೆ : 977(1072)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಗೋವಿಂದ ರಾಜು(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 15-03-2021

ಉತ್ತರಿಸುವ ಸಚಿವರು: ಮಾನ್ಯ ಕಾರ್ಮಿಕ ಸಚಿವರು

ವಿಷಯ : ವಿಸ್ಟ್ರಾನ್ ಆಪಲ್ ಐ ಫೋನ್ ಮೊಬೈಲ್ ಕಂಪನಿಯಲ್ಲಿ ನಡೆದ ಗಲಭೆ ಕುರಿತು

(ಅ) ಕೋಲಾರ ಜಿಲ್ಲೆಯ ನರಸಾಪುರ ಕೈಗಾರಿಕೆ ಪ್ರದೇಶದಲ್ಲಿರುವ ವಿಸ್ಟ್ರಾನ್ ಆಪಲ್ ಐ ಫೋನ್ ಮೊಬೈಲ್ ಕಂಪನಿಯಲ್ಲಿ ನಡೆದ ಗಲಭೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಗಲಭೆಗೆ ನಿರ್ಧಿಷ್ಟವಾದ ಕಾರಣಗಳೇನು;

(ಆ) ಸದರಿ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರ ಹಾಗೂ ನೌಕರರ ಸಂಖ್ಯೆ ಎಷ್ಟು;

(ಇ) ಗಲಭೆಗೆ ಮೊದಲು ಈ ಕಂಪನಿಯಲ್ಲಿ ಕಾರ್ಮಿಕರ ಹಾಗೂ ಕೈಗಾರಿಕೆ ಕಾಯ್ದೆಗಳನ್ನು ಪಾಲಿಸಲಾಗಿದೆಯೇ;

(ಈ) ಕಾರ್ಮಿಕರ ವೇತನ ಹಾಗೂ ಇನ್ನಿತರೆ ಸವಲತ್ತುಗಳನ್ನು ನೀಡುವಲ್ಲಿ ಕಂಪನಿಯು ಸರ್ಕಾರದ ಹಾಗೂ ಕಂಪನಿ ನಿಯಮಗಳನ್ನು ಪಾಲಿಸಿದೆಯೇ;

(ಉ) ಕಂಪನಿ ಕಾಯ್ದೆ ಹಾಗೂ ಕಾರ್ಮಿಕರ ವೇತನ ನಿಯಮಗಳ ಕಾಯ್ದೆಯನ್ನು ಪಾಲಿಸಲು ಕಾರ್ಮಿಕ ಇಲಾಖೆಯ ಅಧಿಕಾರಿಗಳು ವಿಫಲವಾಗಿರುವುದು ಏಕೆ;

(ಊ) ಪ್ರಸ್ತುತ ಕಂಪನಿಯು ಪುನರಾರಂಭವಾಗಿರುವುದರಿಂದ ಹಿಂದಿನ ಸಮಸ್ಯೆಗಳೆಲ್ಲವನ್ನು ಪರಿಹರಿಸಲಾಗಿದೆಯೇ?